


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 211(1514)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಸಣ್ಣ ನೀರಾವರಿ ಸಚಿವರು

ವಿಷಯ : ಬಾಂದಾರ ನಿರ್ಮಿಸುವಲ್ಲಿ ಅವ್ಯವಹಾರದ ತಡೆ ಬಗ್ಗೆ

(ಅ) ಕಾರಾವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿನಲ್ಲಿ 2018-19ನೇ ಸಾಲಿನಿಂದ ಉಂಟಾದ ಅತೀವೃಷ್ಟಿಯಿಂದಾಗಿ ತಾಲ್ಲೂಕಿನಲ್ಲಿ ಹರಿಯುವ ತಟ್ಟಿ ಹಳ್ಳಕ್ಕೆ ಕೃಷಿ ಭೂಮಿಗೆ ನಿರೂಣಿಸಲು ಸಹಾಯವಾಗಲೆಂದು ನಿರ್ಮಿಸಲಾದ 23 ಸಣ್ಣ ಸಣ್ಣ ಬಾಂದಾರುಗಳಲ್ಲಿ, ಹಲವು ಬಾಂದರುಗಳು ಭಾಗಶಃ ಹಾಳಾಗಿದ್ದು ಸರ್ಕಾರ 52 ಕೋಟಿ ರೂ. ವೆಚ್ಚದಲ್ಲಿ ದುರಸ್ತಿ ಕಾರ್ಯಕೈಗೊಳ್ಳುವಲ್ಲಿ ಅಧಿಕಾರಿಗಳು ಹಾಗೂ ಗುತ್ತಿಗೆದಾರರೂ ಕಳಪೆ ಕಾಮಗಾರಿ ಕೈಗೊಂಡಿದ್ದರಿಂದ ರೈತರು ಸಂಕಷ್ಟ ಎದುರಿಸುವಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) 2020ರಲ್ಲಿ ಉಂಟಾದ ಬಾರಿ ಪ್ರವಾಹದಿಂದ ದುರಸ್ತಿ ಕಾರ್ಯ ಕೈಗೊಂಡ ಬಾಂದಾರುಗಳು ಕಳಪೆ ಕಾಮಗಾರಿಯಿಂದ ಕೊಚ್ಚಿಕೊಂಡು ಹೋಗಿದ್ದು, ಇದರಿಂದ ರೈತರು ಬೆಳೆದ ಬೆಳೆ ನಷ್ಟವಾಗಿ ತೊಂದರೆ ಅನುಭವಿಸುತ್ತಿದ್ದು ಇದಕ್ಕೆ ಸಂಬಂಧಿಸಿದ ಅಧಿಕಾರಿಗಳ ವಿರುದ್ದ ಸರ್ಕಾರ ಕ್ರಮ ಕೈಗೊಳ್ಳವುದೇ; (ವಿವರ ನೀಡುವುದು)

(ಇ) ಈ ರೀತಿ ಕೋಟ್ಯಾಂತರ ರೂಪಾಯಿ ಅನುದಾನ ದುರುಪಯೋಗ ಮಾಡಿಕೊಂಡು ಕೆಲವೊಂದು ಕಾಮಗಾರಿ ಮಾಡಿದ ಅಧಿಕಾರಿಗಳ ಬಗ್ಗೆ ಉನ್ನತ ತನಿಖೆ ಮಾಡಿಸಿ, ಆಗಿರುವ ನಷ್ಟವನ್ನು ಸಂಬಂಧಿಸಿದ ಅಧಿಕಾರಿಗಳಿಂದಲೇ ಭರಿಸಲು ಕ್ರಮ ಕೈಗೊಳ್ಳಲಾಗುವುದೇ? (ವಿವರ ನೀಡುವುದು)